# ರಾಬರ್ಟ್ ಮೆರ್ನ್ಸ್ ಯೆರ್ಕಿಸ್ (1876-1956)

## ಇಂದಿರಾ ಜೈಪ್ರಕಾಶ್



***

ಅಮೆರಿಕೆಯ ಮನೋವಿಜ್ಞಾನಿ. ಈತ ತುಲನಾತ್ಮಕ ಅಧ್ಯಯನ, ಬುದ್ಧಿಶಕ್ತಿ ಮಾಪನ ಮತ್ತು ಮಿಲಿಟರಿ ಮನೋವಿಜ್ಞಾನ ಕ್ಷೇತ್ರಗಳಲ್ಲಿ ಹೆಸರು ಮಾಡಿದವನು. ಪೆನಿಸಿಲ್ವೇನಿಯಾದ ಗ್ರಾಮ ಪ್ರದೇಶದಲ್ಲಿ ಬೆಳೆದವನು, ರೈತರ ಕಷ್ಟಕರ ಜೀವನ ತಪ್ಪಿಸಿಕೊಳ್ಳಲು ವೈದ್ಯನಾಗಬಯಸಿದ್ದ. ಹಾರ್ವರ್ಡ್ ವಿಶ್ವವಿದ್ಯಾಲಯದಲ್ಲಿ ಜೀವಶಾಸ್ತ್ರ ಓದುತ್ತಿದ್ದವನು ಪ್ರಾಣಿಗಳ ವರ್ತನೆಯಲ್ಲಿ ಆಸಕ್ತನಾಗಿ ತುಲನಾತ್ಮಕ ಮನೋವಿಜ್ಞಾನ (Comparative Psychology)ದಲ್ಲಿ ಸಂಶೋಧನೆಗೆ ತೊಡಗಿ ಡಾಕ್ಟರೇಟ್ ಪದವಿ ಪಡೆದ. ಇಲಿ ಮುಂತಾದ ಪ್ರಾಣಿಗಳನ್ನು ಪ್ರಯೋಗಾಲಯದಲ್ಲಿ ಬಳಸುವ ಪದ್ಧತಿ ಪ್ರಾರಂಭಿಸಿದ. ಇವನು ತನ್ನ ವಿದ್ಯಾಭ್ಯಾಸಕ್ಕೆಂದು ಮಾಡಿದ್ದ ಸಾಲದ ಹೊರೆ ಇಳಿಸಲು ಮೂರು ಕೆಲಸಗಳನ್ನು ಮಾಡುತ್ತಿದ್ದನಂತೆ. ಪ್ರಾಣಿಗಳ ವರ್ತನೆ ಅಭ್ಯಸಿಸಲು ತನ್ನ ಮನೆಯಲ್ಲೇ ಎರಡು ಚಿಂಪಾಂಜಿಗಳನ್ನು ಸಾಕಿಕೊಂಡಿದ್ದ. ಅವುಗಳನ್ನು ಅವಲೋಕಿಸಿ ಅವುಗಳೊಡನೆ ಕಳೆದ ಸಮಯದ ವಿವರ 1924ರಲ್ಲಿ 'ಆಲ್ಮೋಸ್ಟ್ ಹ್ಯುಮನ್ (Almost Human)' ಎಂದು ಪ್ರಕಟವಾಯಿತು. ಇದೇ ವರ್ಷ ಯೇಲ್ ವಿಶ್ವವಿದ್ಯಾಲಯದಲ್ಲಿ 'ಮನೋಜೀವಶಾಸ್ತ್ರ' ಎಂಬ ಹೊಸ ಕ್ಷೇತ್ರದ ಅಧ್ಯಯನ ಪ್ರಾರಂಭಿಸಿದ. ರಾಕ್‌ಫೆಲ್ಲರ್ ಸಂಸ್ಥೆಯ ಧನಸಹಾಯದಿಂದ ಫ್ಲೋರಿಡಾದ ಆರೆಂಜ್ ಪಾರ್ಕ್‌ನಲ್ಲಿ ಚಿಂಪಾಂಜಿಗಳ ಮೇಲಿನ ಪ್ರಯೋಗಾಲಯ ಸ್ಥಾಪಿಸಿದ. ಚಿಂಪಾಂಜಿಗಳ ಭಾಷೆ ಎನ್ನಲಾದ 'ಯೆರ್ಕಿಶ್' (Yerkish)' ಪರಿಚಯಿಸಿದ.

1917ರಲ್ಲಿ ಯೆರ್ಕಿಸ್ ಅಮೆರಿಕನ್ ಸೈಕಲಾಜಿಕಲ್ ಅಸೋಸಿಯೇಶನ್‌ನ ಅಧ್ಯಕ್ಷನಾದನು. ಈ ವೇಳೆಯಲ್ಲಿ ವಿಶ್ವದ ಮೊದಲ ಸಮರ ಪ್ರಾರಂಭವಾಗಿತ್ತು. ಇವನು ಮನೋವಿಜ್ಞಾನಿಗಳು ಸೇನೆಗೆ ಸಂಬಂಧಿಸಿದ ಕೆಲಸಗಳಲ್ಲಿ ತೊಡಗಿಸಿಕೊಳ್ಳಬೇಕೆಂದು ಸಲಹೆ ಮಾಡಿದ. ಇವನ ಪ್ರಭಾವದಿಂದ ಮನೋವಿಜ್ಞಾನಿಗಳು ಸೇನೆಗೆ ಆಯ್ಕೆ, ಮನೋಮಾಪನ ಮುಂತಾದ ಯುದ್ಧಕ್ಕೆ ಪೂರಕವಾದ ಕೆಲಸಗಳನ್ನು ಮಾಡತೊಡಗಿದರು. 1919ರಲ್ಲಿ ಸೈನ್ಯದ ವೈದ್ಯಕೀಯ ತಂಡದಲ್ಲಿ ಮನೋವಿಜ್ಞಾನಿಗಳನ್ನು ನೇಮಕಮಾಡಲು ನೆರವಾದ. ಇದು ಮಿಲಿಟರಿ ಮನೋವಿಜ್ಞಾನಕ್ಕೆ

ಕಾರಣವಾಯಿತು ಎನ್ನಲಾಗಿದೆ. ಈಗಲೂ ಬೇರೆ ಅಧ್ಯಯನ ಕ್ಷೇತ್ರದಲ್ಲಿದ್ದು ಮಿಲಿಟರಿ ಮನೋವಿಜ್ಞಾನದಲ್ಲಿ ಉತ್ತಮ ಕೆಲಸಮಾಡಿದವರಿಗೆ ಯೆರ್ಕಿಸ್‌ನ ಹೆಸರಿನಲ್ಲಿ ಪ್ರಶಸ್ತಿ ಕೊಡುವ ಪದ್ಧತಿ ಇದೆ. ಸೈನಿಕರಿಗೆಂದು ಆರ್ಮಿ ಆಲ್ಫಾ (ಸುಶಿಕ್ಷಿತರಿಗೆ) ಮತ್ತು ಆರ್ಮಿ ಬೀಟಾ (ಅಶಿಕ್ಷಿತರು ಮತ್ತು ಆಂಗ್ಲ ಭಾಷೆ ಬಾರದವರಿಗೆ, Army's Alpha and Beta Intelligence Tests) ಎನ್ನುವ ಬುದ್ಧಿಶಕ್ತಿ ಪರೀಕ್ಷೆಗಳು ತಯಾರಾದವು. ಇವುಗಳನ್ನು ಒಂದು ಮಿಲಿಯನ್ ಸೈನಿಕರಿಗೆ ನೀಡಲಾಗಿತ್ತು. ಈ ಬುದ್ಧಿಶಕ್ತಿ ಪರೀಕ್ಷೆಗಳಲ್ಲಿ ವರ್ಣೀಯರು, ಹೊಸದಾಗಿ ವಲಸೆ ಬಂದಿರುವವರು ಕೆಳಮಟ್ಟದ ಅಂಕ ಗಳಿಸುತ್ತಿದರು. ಅದಕ್ಕೆ ನಿಜವಾದ ಕಾರಣ ಅವರ ಬುದ್ಧಿಶಕ್ತಿಯ ಕೊರತೆಯಲ್ಲ, ಮಾಪನದಲ್ಲಿನ ಅವ್ಯವಸ್ಥೆ. ಪರೀಕ್ಷೆ ಕೇವಲ ಸವರ್ಣೀಯ ಅಮೆರಿಕನ್ನರ ಅನುಭವಗಳನ್ನು ಆಧರಿಸಿತ್ತು. ಬೇರೆ ಹಿನ್ನೆಲೆಯಿಂದ ಬಂದವರಿಗೆ ಸೂಕ್ತವಾಗಿರಲಿಲ್ಲ. ಮುಂದಿನ ಸಂಶೋಧನೆಗಳು ಇವನ ಪರೀಕ್ಷೆಗಳ ತಪ್ಪುಗಳನ್ನು ಎತ್ತಿ ತೋರಿಸಿದವು.

1924ರಲ್ಲಿ ಯೇಲ್ ವಿಶ್ವವಿದ್ಯಾಲಯದಲ್ಲಿ ಮತ್ತೆ ವಾನರಗಳನ್ನು ಅಧ್ಯಯನ ಮಾಡಿ ತನ್ನ ಪತ್ನಿ ಅಡಾ ವಾಟರ್ಸನ್ ಜೊತೆಗೆ 'ದಿ ಗ್ರೇಟ್ ಏಪ್ಸ್ (The Great Apes)' ಎಂಬ ಕೃತಿ ಹೊರತಂದಿದ್ದ. ಇದು ದಶಕಗಳವರೆಗೂ ವಾನರಗಳ ಜೈವಿಕ ಮತ್ತು ಮಾನಸಿಕ ಅಧ್ಯಯನಕ್ಕೆ ಅನಿವಾರ್ಯವಾದ ಪುಸ್ತಕ ಎನಿಸಿತ್ತು. ಅವನ ಗೌರವಾರ್ಥ ಈ ವಾನರಗಳ ಅಧ್ಯಯನದ ಪ್ರಯೋಗಶಾಲೆಗೆ ಯೆರ್ಕಿಸ್‌ನ ಹೆಸರಿಡಲಾಗಿತ್ತು. ಜಾನ್ ಡಾಡ್ಸನ್ ಜೊತೆಗೆ ಇವನು ಅಭಿಪ್ರೇರಣೆಗೆ ನಡೆಸಿದ ಪ್ರಯೋಗದಿಂದ ಯೆರ್ಕಿಸ್ - ಡಾಡ್ಸನ್ ನಿಯಮ (Yerkes- Dodson Law) ಹೊರಬಿತ್ತು. ಇವನಿಗೆ ಬುದ್ಧಿಶಕ್ತಿ ಅನುವಂಶೀಯ ಎಂಬ ನಂಬಿಕೆ ಇತ್ತು. 1910ರಿಂದ 1920 ರವರೆಗೆ ವರ್ಣಭೇದ ಪ್ರೋತ್ಸಾಹಿಸುವ ತಳಿಶಾಸ್ತ್ರಜ್ಞರೊಡನೆ ಕೆಲಸಮಾಡಿದ್ದ.

ಇದರಿಂದಾಗಿ ಇವನ ಮೇಲೆ ಬಹಳ ಅಪವಾದಗಳೂ ಬಂದಿದ್ದವು. ಇವನು ಕೆಲವು ಜನಾಂಗದವರು ಅನುವಂಶಿಕವಾಗಿಯೇ ಕೆಳಮಟ್ಟದ ಬುದ್ಧಿಶಕ್ತಿ ಹೊಂದಿದ್ದು ಸಮಾಜದಲ್ಲಿ ತೊಂದರೆ ಉಂಟುಮಾಡುತ್ತಾರೆ ಎಂಬ ಅಭಿಪ್ರಾಯ ಮೂಡಿಸಿದ್ದ. ಇದು ಅಮೆರಿಕೆಯಲ್ಲಿ ಪರಕೀಯರ ಬಗ್ಗೆ ಅಸಹನೆ ಮತ್ತು ತಾತ್ಸಾರ (American xenophobia and anti-immigrant sentiment) ಹೆಚ್ಚಿಸಲು ಒಂದು ಕಾರಣವಾಯಿತು. ಉತ್ತಮ ಸಂತಾನ ಶಾಸ್ತ್ರಜ್ಞರು (Eugenicists ) ಈ ವರದಿಯನ್ನು ಉಪಯೋಗಿಸಿಕೊಂಡು 'ಕೀಳು' ತಳಿಯ ದೇಶಗಳಿಂದ ಬರುವ ಜನರಿಗೆ ಪ್ರವೇಶ ನಿರಾಕರಿಸುವ ಕಾನೂನನ್ನು ಸೂಚಿಸಿತ್ತು. ಇಂತಹ ಜನರನ್ನು ಅಮೆರಿಕೆಗೆ ಸೇರಿಸಿದರೆ ನಮ್ಮ ಜನಾಂಗ ಹಾಳಾಗುತ್ತದೆ ಎಂದು ಜನಾಂಗ ಭೇದಕ್ಕೆ ಇವನ (ಅ)ವೈಜ್ಞಾನಿಕ ಸಾಕ್ಷ್ಯಗಳನ್ನು ಬಳಸಲಾಯಿತು. ಮುಂದೆ ಇವನ ಸಂಶೋಧನೆ ಮತ್ತು ವಿಚಾರಗಳ ಪುನರ್ವಿಮರ್ಶೆ ನಡೆಯಿತು. ವಿಜ್ಞಾನಿಗಳು ಸಮಾಜದಲ್ಲಿ ತಮ್ಮ ಪ್ರಭಾವದಿಂದ ತಪ್ಪು ಕಲ್ಪನೆಗಳಿಗೆ ಪ್ರೋತ್ಸಾಹ ನೀಡುವುದರ ಬಗ್ಗೆ ಬುದ್ಧಿಜೀವಿಗಳಲ್ಲಿ ಅಸಹನೆ ಮೂಡಿತು. ಹೀಗೆ ವರ್ಣಬೇಧ ನೀತಿಯನ್ನು ಬೆಂಬಲಿಸಿದ್ದಕ್ಕೆ 'ಯೆರ್ಕಿಸ್ ರಾಷ್ಟ್ರೀಯ ವಾನರ ಅಧ್ಯಯನ ಸಂಸ್ಥೆ'ಯನ್ನು ಇವನ ಹೆಸರು ತೆಗೆದು 2022 ರಲ್ಲಿ 'ಎಮೊರಾಯ್ ರಾಷ್ಟ್ರೀಯ ವಾನರ ಅಧ್ಯಯನ ಸಂಸ್ಥೆ' ಎಂದು ಬದಲಿಸಲಾಯಿತು.

***